KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮೇ ೫, ೨೦೧೧ (ವೈಶಾಖ ೧೫, ಶಕ ವರ್ಷ ೧೯೩೩) | ಸಂಚಿಕೆ ೧೮ |
|---|---|---|



## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಸರ್ಕಾರ**

**ಅರಣ್ಯ ಇಲಾಖೆ**

**ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಕಚೇರಿ, ಸಂಶೋಧನೆ, ಅರೆಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು – 560 076**

**ಸಂಕ್ಷಿಪ್ತ ಟೆಂಡರ್ ಹಾಗೂ ಹರಾಜು ಪ್ರಕಟಣೆ**

**ಸಂಖ್ಯೆ: ಎ4–ಎಸ್.ಎ.ಎಸ್–ಸಿಆರ್–3/2010–11, ದಿನಾಂಕ: 3ನೇ ಮೇ 2011**

**ವಿಷಯ:** ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಘಟಕಕ್ಕೆ ಸಂಬಂಧಿಸಿದ ಕಿರು ಅರಣ್ಯ ಉತ್ಪನ್ನಗಳನ್ನು 2011–13ನೇ ಸಾಲಿಗೆ ಟೆಂಡರ್–ಕಂ– ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ವೃತ್ತಕ್ಕೆ ಸಂಬಂಧಿಸಿದ ಸಂಶೋಧನಾ ವಲಯಗಳಲ್ಲಿನ ಸಂಶೋಧನಾ ಕೇಂದ್ರಗಳಲ್ಲಿನ ಕಿರು ಅರಣ್ಯ ಉತ್ಪನ್ನಗಳ ಫಸಲುಗಳನ್ನು 2011–13ನೇ ಸಾಲಿಗೆ ಅಂದರೆ 25–05–2011 ರಿಂದ 31–08–2013 ರ (2 ವರ್ಷ) ಅವಧಿಗೆ ಅಥವಾ ಟೆಂಡರ್ ಕಂ ಹರಾಜು ಒಪ್ಪಿಗೆಯಾಗಿ ಕರಾರು ಮಾಡಿಕೊಂಡ ದಿನದಿಂದ ದಿನಾಂಕ: 31–08–2013 ರವರೆಗೆ ಸಂಗ್ರಹಿಸುವ ಹಕ್ಕನ್ನು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಈ ಕಚೇರಿಯ ವಿವರವುಳ್ಳ ಪ್ರಕಟಣೆಯಲ್ಲಿರುವ ಷರತ್ತುಗಳಿಗನುಗುಣವಾಗಿ ಕೆಳಗಿನ ತಪ್ಸೀಲಿನಲ್ಲಿ ಸೂಚಿಸಿರುವ ಪ್ರಕಾರ ಟೆಂಡರ್–ಕಂ–ಬಹಿರಂಗ ಹರಾಜಿನ ಮೂಲಕ ದಿನಾಂಕ:25–05–2011 ರಂದು ಮಾರಾಟ ಮಾಡುವರು. ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್–ಕಂ– ಹರಾಜು ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ: 27–05–2011 ರಂದು ಎರಡನೇ ಬಾರಿಗೆ ಮಾರಾಟ ಮಾಡುವರು. ಅರಣ್ಯ ಗುತ್ತಿಗೆದಾರರು ಭಾಗವಹಿಸಿ ಪಡೆಯಬಹುದು. ಪ್ರಕಟಿಸಿರುವ ಅರಣ್ಯ ಉತ್ಪನ್ನವು ತಪ್ಸೀಲಿನಲ್ಲಿ ಸೂಚಿಸಿರುವ ಸಂಶೋಧನಾ ಕೇಂದ್ರಗಳಿಗೆ ಮಾತ್ರ ಸಂಬಂಧಿಸಿರುತ್ತದೆ.

**ತಪ್ಸೀಲು**

| ಕ್ರಮ ಸಂಖ್ಯೆ | ಫಸಲು ರೂಢಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜಿನ ದಿನಾಂಕ ಮತ್ತು ವೇಳೆ | ಟೆಂಡರ್ ಪಾರಂ ಜೊತೆ ಲಗತ್ತಿಸಬೇಕಾದ ಠೇವಣಿ / ಹರಾಜಿನ ಹಣ |
|---|---|---|---|---|---|
| 1 | 2 | 3 | 4 | 5 | 6 |

| ಕ್ರಮ ಸಂಖ್ಯೆ | ಫಸಲು ರೂಢಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜಿನ ದಿನಾಂಕ ಮತ್ತು ವೇಳೆ | ಟೆಂಡರ್ ಪಾರಂ ಜೊತೆ ಲಗತ್ತಿಸಬೇಕಾದ ಠೇವಣಿ / ಹರಾಜಿನ ಹಣ |
|---|---|---|---|---|---|
| 1 | 2 | 3 | 4 | 5 | 6 |
| **2011–13ನೇ ಸಾಲಿನ ಗೋಡಂಬಿ ಫಸಲಿನ ಮಾರಾಟ** | | | | | |
| 1. | ಹೊಸಕೋಟೆ ಸಂಶೋಧನಾ ವಲಯದ ಗೊಟ್ಟಿಪುರ, ಅ) ನಲ್ಲಾಳ–ಎ2, ಹಳೆಯ ಪ್ಲಾಟ್ ಆ) ನಲ್ಲಾಳ–ಎ2 ಬ್ಲಾಕ್ ನಲ್ಲಿರುವ 180 ಮರಗಳು ಇ) ನಲ್ಲಾಳ–ಬಿ ಬ್ಲಾಕ್ ಸಂಶೋಧನಾ ಕೇಂದ್ರದಲ್ಲಿರುವ 490 ಮರಗಳು ಈ) ನಲ್ಲಾಳ–ಸಿ ಹಳೆಯ ಪ್ಲಾಟ್ ಸಂಶೋಧನಾ ಕೇಂದ್ರದಲ್ಲಿರುವ 560 ಮರಗಳು ಉ) ಗೊಟ್ಟಿಪುರ ಸಂಶೋಧನಾ ಕೇಂದ್ರದಲ್ಲಿರುವ ಹಳೆಯ ಪ್ಲಾಟ್ | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ದೊರೆಸಾನಿಪಾಳ್ಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು–76. | ಗೋಡಂಬಿ ಫಸಲಿನ ಮಾರಾಟ ದಿನಾಂಕ: 25–05–2011 ರಂದು ಮಧ್ಯಾಹ್ನ 3.00 ಗಂಟೆಯವರೆಗೆ | ದಿನಾಂಕ: 25–05–2011 ರಂದು ಮಧ್ಯಾಹ್ನ 3.30 ಗಂಟೆಯಿಂದ | 1. ಟೆಂಡರ್ ಫಾರಂ ಜೊತೆ ರೂ3000/– (ಮೂರು ಸಾವಿರ ಮಾತ್ರ) ಮೊಬಲಗಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ಲಗತ್ತಿಸಿರಬೇಕು 2. ಹರಾಜಿನಲ್ಲಿ ಭಾಗವಹಿಸುವವರು ರೂ. 3000/– (ಮೂರು ಸಾವಿರ ಮಾತ್ರ) ನಗದು ಹಣವನ್ನು ಹರಾಜಿಗೆ ಮುಂಚಿತವಾಗಿ ಪಾವತಿಸುವುದು |
| 2. | ಹೊಸಕೋಟೆ ಸಂಶೋಧನಾ ವಲಯದ ಗೊಟ್ಟಿಪುರ, ಅ) ನಲ್ಲಾಳ–ಎ1, ಬ್ಲಾಕ್ ಸಂಶೋಧನಾ ಕೇಂದ್ರಗಳಲ್ಲಿರುವ 630 ಮರಗಳು ಆ) ನಲ್ಲಾಳ–ಬಿ ಬ್ಲಾಕ್ ಸಂಶೋಧನಾ ಕೇಂದ್ರಗಳಲ್ಲಿರುವ 278 ಮರಗಳು ಇ) ನಲ್ಲಾಳ–ಸಿ ಬ್ಲಾಕ್ ಸಂಶೋಧನಾ ಕೇಂದ್ರಗಳಲ್ಲಿರುವ 170 ಮರಗಳು | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ದೊರೆಸಾನಿಪಾಳ್ಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು–76. | ನೇರಳೆ ಫಸಲಿನ ಮಾರಾಟ ದಿನಾಂಕ: 25–05–2011 ರಂದು ಮಧ್ಯಾಹ್ನ 3.00 ಗಂಟೆಯವರೆಗೆ | ದಿನಾಂಕ: 25–05–2011 ರಂದು ಮಧ್ಯಾಹ್ನ 3.30 ಗಂಟೆಯಿಂದ | 1. ಟೆಂಡರ್ ಫಾರಂ ಜೊತೆ ರೂ. 3000/– (ಮೂರು ಸಾವಿರ ಮಾತ್ರ) ಮೊಬಲಗಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ಲಗತ್ತಿಸಿರಬೇಕು 2. ಹರಾಜಿನಲ್ಲಿ ಭಾಗವಹಿಸುವವರು ರೂ. 3000/– (ಮೂರು ಸಾವಿರ ಮಾತ್ರ) ನಗದು ಹಣವನ್ನು ಹರಾಜಿಗೆ ಮುಂಚಿತವಾಗಿ ಪಾವತಿಸುವುದು |

ಹೆಚ್ಚಿನ ಮಾಹಿತಿಯನ್ನು ಕಚೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

ಟೆಂಡರ್ ನಮೂನೆಯನ್ನು ದಿನಾಂಕ: 25–05–2011 ಮತ್ತು 27–05–2011 ರಂದು 1.00 ಗಂಟೆವರೆಗೆ ಕಚೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 200.00 (ತೆರಿಗೆ ಪ್ರತ್ಯೇಕ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಷೆಡ್ಯೂಲ್ ಕಾಲಂ ಸಂಖ್ಯೆ: 6 ರಲ್ಲಿರುವಂತೆ ಪ್ರತ್ಯೇಕವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಟೆಂಡರ್ ನಡೆಯಬಹುದಾದ ಸಂದರ್ಭದಲ್ಲಿ ಟೆಂಡರ್ ನಮೂನೆಗಳೊಂದಿಗೆ ಸಲ್ಲಿಸಬೇಕು. ಟೆಂಡರ್ ನಮೂನೆಗಳನ್ನು ಆಯಾ ದಿನಾಂಕದಂದು 1.00 ಗಂಟೆಯವರಗೆ ಪಡೆಯಬಹುದಾಗಿದೆ.

**ನಿಬಂಧನೆಗಳು**

1. ಟೆಂಡರ್ / ಹರಾಜಿನಲ್ಲಿ ಭಾಗವಹಿಸಲು 2011–12ನೇ ಸಾಲಿಗೆ ಈ ಕಚೇರಿಯಲ್ಲಿ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು.
2. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ. 200.00 (ತೆರಿಗೆ ಪ್ರತ್ಯೇಕ) ಪಾವತಿ ಮಾಡಿ ದಿನಾಂಕ: 25–05–2011 ಮತ್ತು 27–05–2011 ಕಚೇರಿ ಕೆಲಸದ ವೇಳೆಯಲ್ಲಿ 1.00 ಗಂಟೆಯವರೆಗೆ ಪಡೆಯತಕ್ಕದ್ದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ವಲಯವಾರು ಮತ್ತು ಐಟಂವಾರು ಮೊಹರು ಮಾಡಿ ಸಲ್ಲಿಸುವುದು.
4. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 25–05–2011 ರಂದು ಸಂಜೆ 3.00 ಗಂಟೆಯವರೆಗೆ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 27–05–2011 ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
5. ತಪ್ಶೀಲಿನಲ್ಲಿ ಕಾಣಿಸಿರುವ ಫಸಲನ್ನು ದಿನಾಂಕ: 31–08–2013 ರವರೆಗೆ ಸಂಗ್ರಹಿಸುವ ಹಕ್ಕನ್ನು ಗುತ್ತಿಗೆದಾರರು ಪಡೆದಿರುತ್ತಾರೆ.
6. ಹಿಂದಿನ ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ವಿಜೇತರಾಗಿ ಪಡೆದ ಫಸಲಿನ ಬಾಬ್ತು ಬಾಕಿ ಹೊಂದಿರುವ ಅರಣ್ಯ ಗುತ್ತಿಗೆದಾರರು ಟೆಂಡರ್ / ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
7. ಗೋಡಂಬಿ ಮತ್ತು ನೇರಳೆ ಮರಗಳಲ್ಲಿ ಕಸಿ ಮರಗಳೂ ಸೇರಿರುತ್ತವೆ. ಮರಗಳ ಸಂಖ್ಯೆಯನ್ನು ಮೇಲೆ ನಮೂದಿಸಿದ್ದು, ಸದರಿ ಮರಗಳಲ್ಲಿ ಫಸಲು ಬಿಡುವ ಮರಗಳ ಸಂಖ್ಯೆ ಹೆಚ್ಚು ಅಥವಾ ಕಡಿಮೆಯಾಗುವ ಸಾಧ್ಯತೆಯಿರುತ್ತದೆ. ಇದಕ್ಕೆ ಇಲಾಖೆಗೆ ಯಾವುದೇ ರೀತಿ ಜವಾಬ್ದಾರಿಯಿರುವುದಿಲ್ಲ.
8. ದಿನಾಂಕ: 25–05–2011 ಮತ್ತು 27–05–2011 ರಂದು ಮಧ್ಯಾಹ್ನ 3.00 ಗಂಟೆಯವರೆಗೆ ಟೆಂಡರ್ ಫಾರಂಗಳನ್ನು ಈ ಕಚೇರಿಯಲ್ಲಿ ಪ್ರತ್ಯೇಕವಾಗಿ ನಿಗದಿಪಡಿಸಿದ ಟೆಂಡರ್ ಪೆಟ್ಟಿಗೆಯಲ್ಲಿ ಹಾಕತಕ್ಕದ್ದು. ಹಾಗೂ ಅದೇ ದಿನ ಮಧ್ಯಾಹ್ನ 3.30 ಗಂಟೆಯ ನಂತರ ಟೆಂಡರ್ ಫಾರಂಗಳನ್ನು ಹರಾಜು ಮುಗಿದ ಕೂಡಲೇ ತೆಗೆಯಲಾಗುವುದು.
9. ಇಲಾಖಾ ಉಪಯೋಗಕ್ಕೆ ಅಂದರೆ ಸಂಶೋಧನಾ ಚಟುವಟಿಕೆಗಳಿಗೆ ಬೇಕಾಗಿರುವ ಕ್ಲೋನಲ್ ಆರ್ಚರ್ಡ್ಸ್ ಮತ್ತು ಸೀಡ್ಲಿಂಗ್ ಸೀಡ್ ಆರ್ಚರ್ಡ್ಸ್ ಗಳಲ್ಲಿ ಸಂಗ್ರಹಿಸಿದ ಹಣ್ಣು ಮತ್ತು ಬೀಜಗಳನ್ನು ಇಲಾಖಾ ಸಿಬ್ಬಂದಿಯ ಉಸ್ತುವಾರಿಯಲ್ಲಿ ಸಂಗ್ರಹಿಸಿ ಇಲಾಖೆಗೆ ಕೊಡತಕ್ಕದ್ದು. ನಲ್ಲಾಳ–ಎ1 ರಲ್ಲಿ ನೇರಳೆ ಹಣ್ಣಿನ 50 ಬೀಜೋತ್ಪಾದನ ಮರಗಳಿದ್ದು ಈ ಮರಗಳಿಂದ ಹಣ್ಣುಗಳನ್ನು ಇಲಾಖೆ ಸಂಗ್ರಹಿಸುತ್ತದೆ, ಈ ಮರಗಳನ್ನು ಟೆಂಡರ್‌ನಿಂದ ಹೊರತುಪಡಿಸಲಾಗಿದೆ. ನಲ್ಲಾಳ–ಎ2 ನಲ್ಲಿ 30 ಮರಗಳು ಮತ್ತು ನಲ್ಲಾಳ–ಸಿ ನಲ್ಲಿ 20 ಗೋಡಂಬಿ ಬೀಜೋತ್ಪಾದನ ಮರಗಳಿದ್ದು ಈ ಮರಗಳಿಂದ ಹಣ್ಣುಗಳನ್ನು ಇಲಾಖೆ ಸಂಗ್ರಹಿಸುತ್ತದೆ, ಈ ಮರಗಳನ್ನು ಟೆಂಡರ್‌ನಿಂದ ಹೊರತುಪಡಿಸಲಾಗಿದೆ
10. ಯಶಸ್ವಿ ಬಿಡ್ / ಟೆಂಡರ್‌ದಾರರು ಹರಾಜು ಮುಗಿದ ಕೂಡಲೇ ಹರಾಜು / ಟೆಂಡರ್ ಪೂರ್ಣ ಹಣದೊಂದಿಗೆ ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪೂರ್ಣವಾಗಿ ಪಾವತಿಸತಕ್ಕದ್ದು. ತಪ್ಪಿದಲ್ಲಿ ಅಂತಹವರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜು / ಟೆಂಡರ್ ನಿಯಮದಂತೆ ಕ್ರಮ ತೆಗೆದುಕೊಳ್ಳಲಾಗುವುದು.
11. ಮೇಲ್ಕಂಡ ಟೆಂಡರ್ / ಹರಾಜಿನಲ್ಲಿ ಭಾಗವಹಿಸುವ ಮುನ್ನ ಅರಣ್ಯ ಗುತ್ತಿಗೆದಾರರು ಆಯಾಯಾ ಸಂಶೋಧನಾ ವಲಯ ಅರಣ್ಯಾಧಿಕಾರಿಯವರನ್ನು ಸಂಪರ್ಕಿಸಿ, ನೋಡಲು ಅನುಮತಿ ಪಡೆದು ಸಂಶೋಧನಾ ಕೇಂದ್ರ ಪ್ರದೇಶದಲ್ಲಿರುವ ಫಸಲುಗಳನ್ನು ಪರಿಶೀಲಿಸಿಕೊಳ್ಳಬಹುದು.
12. ಪ್ರತಿ ಸಂಶೋಧನಾ ವಲಯಕ್ಕೆ ಬೇರೆ ಬೇರೆ ಟೆಂಡರ್ ಫಾರಂನ್ನು ನಿಗಧಿತ ಇ.ಎಂ.ಡಿ ಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.
13. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅವುಗಳನ್ನು ತಿರಸ್ಕರಿಸಲಾಗುವುದು ಮತ್ತು ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
14. ನಿಗಧಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸುವುದಿಲ್ಲ.
15. ಯಾವುದೇ ಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.
16. ಫಸಲನ್ನು ಸಂಗ್ರಹಿಸುವಾಗ ಇತರೆ ನೆಡುತೋಪುಗಳು / ಸಂಶೋಧನಾ ಪ್ಲಾಟುಗಳನ್ನು ಹಾಳು ಮಾಡಿದ್ದಲ್ಲಿ, ಗಿಡ, ಮರಗಳನ್ನು ಕಡಿದು ನಾಶಪಡಿಸಿದ್ದಲ್ಲಿ ಸರ್ಕಾರಕ್ಕೆ ಆದ ನಷ್ಟವನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ವಸೂಲು ಮಾಡಲಾಗುವುದು.
17. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡೀಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
18. ಟೆಂಡರ್ / ಹರಾಜಿನಲ್ಲಿ ಸಫಲರಾದ ಗುತ್ತಿಗೆದಾರರು ಸೂರ್ಯೋದಯದ ನಂತರ ಮತ್ತು ಸೂರ್ಯಾಸ್ತಮದ ಮೊದಲು ಫಸಲನ್ನು ಸಂಗ್ರಹಿಸಬೇಕು.

19. ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಲು ಟೆಂಡರ್ ನಡೆಯುವ ಹಿಂದಿನ ದಿನ ಅಥವಾ ಟೆಂಡರ್ ದಿನ ಅರ್ಜಿ ಸಲ್ಲಿಸಿದ್ದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನೋಂದಾವಣೆಯಾಗದೇ ಈ ಟೆಂಡರ್ / ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
20. ಯಾವುದೇ ಇ.ಎಂ.ಡಿ ಯನ್ನು ಟೆಂಡರ್‌ನಲ್ಲಿ ಹಾಕದೆ ಟೆಂಡರ್ ಹಾಕಿ ಹರಾಜಿನಲ್ಲಿ ಭಾಗವಹಿಸಿ ಇ.ಎಂ.ಡಿ ಪಾವತಿ ಮಾಡಿದ್ದು, ಟೆಂಡರ್‌ನಲ್ಲಿ ಹೆಚ್ಚಿನ ಬೆಲೆ ನಮೂದಿಸಿದಲ್ಲಿ ಅಂತಹ ಗುತ್ತಿಗೆದಾರರ ಹರಾಜಿನ ಇ.ಎಂ.ಡಿ ಯನ್ನು ಪರಿಗಣಿಸಿ ಹೆಚ್ಚಿನ ಬೆಲೆ ಬಂದಿರುವ ಟೆಂಡರ್‌ನ್ನು ಅಂಗೀಕರಿಸಲಾಗುವುದು.
21. ಇಲಾಖೆಗೆ ಬೇಕಾದ ಬೀಜಗಳನ್ನು ನೀಡಲು ಗುತ್ತಿಗೆದಾರರಿಗೆ ಇಲಾಖೆಯು ಸೂಚಿಸಿದಾಗ ಅಷ್ಟು ಬೀಜಗಳನ್ನು ಇಲಾಖೆಯ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಕಾಲಕಾಲಕ್ಕೆ ನಿಗಧಿಪಡಿಸಿದ ದರಕ್ಕೆ ಇಲಾಖೆಗೆ ಒದಗಿಸಬೇಕಾಗಿರುತ್ತದೆ.

ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,
ಸಂಶೋಧನೆ, ಬೆಂಗಳೂರು.

ಪಿ.ಆರ್.186

**ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, (ಕರ್ನಾಟಕ ರಾಜ್ಯ ಸರ್ಕಾರದ ಒಂದು ಸಂಸ್ಥೆ)**

**ಹೊನ್ನಾಳಿ ರಸ್ತೆ, ಶಿವಮೊಗ್ಗ–577201**

**ಸಂಕ್ಷಿಪ್ತ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಕರಾಅಕೈನಿ/ಶಿವ/ಸಾಮಿಲ್/11–12, ದಿನಾಂಕ:18.04.2011**

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಸಾಮಿಲ್ ಘಟಕ, ಹೊನ್ನಾಳಿ ರಸ್ತೆ, ಶಿವಮೊಗ್ಗ ಆವರಣದಲ್ಲಿರುವ ಹಳೆಯ ಯಂತ್ರೋಪಕರಣಗಳು ಹಾಗೂ ಅನುಪಯುಕ್ತ ವಸ್ತುಗಳನ್ನು ದಿನಾಂಕ: 25.05.2011ರಂದು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೆ ಮಾಡಲಾಗುವುದು. ಖರೀದಿಸಲಿಚ್ಛಿಸುವವರು ಆ ದಿನ ಭಾಗವಹಿಸಿ ದರಗಳನ್ನು ಸೂಚಿಸಬಹುದಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಕೆಲಸದ ದಿನಗಳಂದು ಪ್ರಾದೇಶಿಕ ವ್ಯವಸ್ಥಾಪಕರು ಕೆ.ಎಸ್.ಎಫ್.ಐ.ಸಿ. ಲಿ., ಹೊನ್ನಾಳಿ ರಸ್ತೆ, ಶಿವಮೊಗ್ಗ ರವರ ಕಛೇರಿಗೆ ಸಂಪರ್ಕಿಸಿ ಪಡೆದುಕೊಳ್ಳುವುದು.

ಇ.ಎಂ.ಡಿ.: 1) ₹ 35000=00 ಹಳೆಯ ಯಂತ್ರೋಪಕರಣಗಳು ಮತ್ತು ಅನುಪಯುಕ್ತ ವಸ್ತುಗಳಿಗೆ.
2) ₹ 5000=00 ಅನುಪಯುಕ್ತ ವಸ್ತುಗಳಿಗೆ ಮಾತ್ರ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಹಾಗೂ ಪ್ರಾದೇಶಿಕ ವ್ಯವಸ್ಥಾಪಕರು,
ಕೆ.ಎಸ್.ಎಫ್.ಐ.ಸಿ. ಶಿವಮೊಗ್ಗ.

**THE KARNATAKA STATE FOREST INDUSTRIES CORPORATION LTD.,**

**(GOVERNMENT OF KARNATAKA UNDERTAKING) HONNALI ROAD, SHIMOGA-577201**

**No.KSFIC/SMG/Tender-cum. auction/11-12, Dated:18.04.2011**

**BRIEF TENDER-CUM-AUCTION SALE NOTIFICATION**

It is hereby notified for the information of general public that old machineries and un-serviceable materials are kept for disposal through Tender-cum-Auction Sale on 25.05.2011 in KSFIC premises, Honnali Road, Shimoga.

For further information, please contact the office of the Regional Manager, KSFIC Ltd., Honnali Road, Shimoga on all working days during office hours.

E.M.D. Rs.35,000.00 for old machineries & un-serviceable articles.

E.M.D. Rs.5,000.00 for un-serviceable articles only.

Deputy Conservator of Forests &
Regional Manager, KSFIC Ltd.,
Shimoga.

PD-54

**ಪೌರಾಡಳಿತ ನಿರ್ದೇಶನಾಲಯ**

**9ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಡಾ: ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು–1 ದಿನಾಂಕ:25.03.2011**

ಈ ಕಛೇರಿಯ ಅಧಿಸೂಚನೆ ಸಂಖ್ಯೆ: DMA/ADM/EST/CR37/2008-09 ದಿನಾಂಕ:24.09.2009ನ್ನು ಮುಂದುವರೆಸುತ್ತಾ 1 ಪ್ರಥಮ ದರ್ಜೆ ಕಂದಾಯ ನಿರೀಕ್ಷಕರ ಹುದ್ದೆಗೆ ನಾಲ್ಕನೇ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಕರ್ನಾಟಕ ನಾಗರೀಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ನೇರನೇಮಕಾತಿ) (ಸಾಮಾನ್ಯ) ನಿಯಮಗಳು 2001ರಡಿ ಕಾಲಕಾಲಕ್ಕೆ ತಿದ್ದುಪಡಿ ಹೊಂದಿರುವ ನಿಯಮಗಳ ಆಧಾರಗಳ ಮೇಲೆ ಸಿದ್ದಪಡಿಸಿ ಸಮಸಂಖ್ಯೆ ಅಧಿಸೂಚನೆಯನ್ನು ದಿನಾಂಕ:03.03.2011ರಲ್ಲಿ ಪ್ರಕಟಿಸಿ ಆಕ್ಷೇಪಣೆಗಳನ್ನು ಆಹ್ವಾನಿಸಿದ್ದು, ಪ್ರಕಟಣೆ ನೀಡಿದ 15 ದಿನಗಳ ಒಳಗೆ ಆಕ್ಷೇಪಣೆಗಳನ್ನು ಸಲ್ಲಿಸಲು ತಿಳಿಸಲಾಗಿತ್ತು. ಸ್ವೀಕೃತಗೊಂಡ ಆಕ್ಷೇಪಣೆಗಳನ್ನು ಪರಿಗಣಿಸಿದ್ದು ಅಂತಿಮವಾಗಿ 1 ಅಭ್ಯರ್ಥಿಯ ಅಂತಿಮ ಆಯ್ಕೆ ಪಟ್ಟಿಯನ್ನು ಸದರಿ ನಿಯಮ 6ರಡಿ ತಯಾರಿಸಿ ಅಭ್ಯರ್ಥಿಯ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ನೇಮಕಾತಿ ಪ್ರಾಧಿಕಾರ : ಆಯುಕ್ತರು**

**ಇಲಾಖೆಯ ಹೆಸರು: ಪೌರಾಡಳಿತ ನಿರ್ದೇಶನಾಲಯ**

| ಕ್ರ. ಸಂ. | ಅಭ್ಯರ್ಥಿಯ ಹೆಸರು | ರೋಲ್ ಸಂಖ್ಯೆ | ಜನ್ಮ ದಿನಾಂಕ | ಪ್ರವರ್ಗ ಹಂಚಿಕೆ | ಪಡೆದ ಅಂಕಗಳು |
|---|---|---|---|---|---|
| 1. | ಶ್ರೀನಿವಾಸಮೂರ್ತಿ ಎಂ. | ಎಸಿ371 | 08.06.1978 | ಪ.ಜಾ.ಮ.ಯೋ(ಪ.ಜಾ–ಇತರೆ ಪರಿವರ್ತಿಸಲಾಗಿದೆ) ಪ.ಜಾ. | 178 |

ಆಯುಕ್ತರು,
ಪೌರಾಡಳಿತ ನಿರ್ದೇಶನಾಲಯ,
ನಗರಾಭಿವೃದ್ಧಿ ಇಲಾಖೆ
ಕರ್ನಾಟಕ ಸರ್ಕಾರ, ಬೆಂಗಳೂರು.

**DIRECTORATE OF MUNICIPAL ADMINISTRATION**

**9th floor, Visveswaraiah Towers, Dr. B.R. Ambedkar Veedhi, Bangalore-560001, Dated:25.03.2011**

In pursuance of this office notification No.DMA/ADM/EST/CR:37/08-09, Dated:24.09.2009, the Fourth provisional select list of candidates for 1 Post Of FGRI for urban Local Bodies of Directorate of Municipal Administration, prepared on the basis of Karnataka Civil Services (Direct Recruitment by Competitive Examinations) (General) Rules, 2001 as amended from time to time, was published vide Notification of even number Dated:03.03.2011 inviting Objections, if any, from Candidates likely to be affected within 15 days of its publication. The Objections received have been considered and the Final Select List of the Candidate is prepared under Rule (6) of the said rules and is hereby published for the information of the candidates.

**Appointing Authority: COMMISSIONER**

**Name of the Department: Directorate of Municipal Administration**

| Sl. No. | Name of Candidate | Roll No. | Date of Birth | Category allocation | Marks |
|---|---|---|---|---|---|
| 1. | SRINIVASA MURTHY M. | AC371 | 08-Jun-78 | SC-EXM (conv. To SC-OTH)/ SC | 178 |

Commissioner
Directorate of Municipal Administration
Department of Urban Development Government of Karnataka, Bangalore.

**ಪೌರಾಡಳಿತ ನಿರ್ದೇಶನಾಲಯ**

**9ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಡಾ: ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು–1 ದಿನಾಂಕ:25.03.2011**

ಈ ಕಛೇರಿಯ ಅಧಿಸೂಚನೆ ಸಂಖ್ಯೆ: DMA/ADM/EST/CR37/2008-09 ದಿನಾಂಕ:24.09.2009ನ್ನು ಮುಂದುವರೆಸುತ್ತಾ 12 ಪ್ರಥಮ ದರ್ಜೆ ಕಂದಾಯ ಸಹಾಯಕರ ಹುದ್ದೆಗಳಿಗೆ ಮೂರನೇ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಕರ್ನಾಟಕ ನಾಗರೀಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ನೇರನೇಮಕಾತಿ) (ಸಾಮಾನ್ಯ) ನಿಯಮಗಳು 2001ರಡಿ ಕಾಲಕಾಲಕ್ಕೆ ತಿದ್ದುಪಡಿ ಹೊಂದಿರುವ ನಿಯಮಗಳ ಆಧಾರಗಳ ಮೇಲೆ ಸಿದ್ದಪಡಿಸಿ ಸಮಸಂಖ್ಯೆ ಅಧಿಸೂಚನೆಯನ್ನು ದಿನಾಂಕ:17.02.2011ರಲ್ಲಿ ಪ್ರಕಟಿಸಿ ಆಕ್ಷೇಪಣೆಗಳನ್ನು ಆಹ್ವಾನಿಸಿದ್ದು, ಪ್ರಕಟಣೆ ನೀಡಿದ 15 ದಿನಗಳ ಒಳಗೆ ಆಕ್ಷೇಪಣೆಗಳನ್ನು ಸಲ್ಲಿಸಲು ತಿಳಿಸಲಾಗಿತ್ತು. ಸ್ವೀಕೃತಗೊಂಡ ಆಕ್ಷೇಪಣೆಗಳನ್ನು ಪರಿಗಣಿಸಿದ್ದು ಅಂತಿಮವಾಗಿ 8 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಸದರಿ ನಿಯಮ 6ರಡಿ ತಯಾರಿಸಿ ಅಭ್ಯರ್ಥಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ನೇಮಕಾತಿ ಪ್ರಾಧಿಕಾರ : ಆಯುಕ್ತರು**

**ಇಲಾಖೆಯ ಹೆಸರು: ಪೌರಾಡಳಿತ ನಿರ್ದೇಶನಾಲಯ**

| ಕ್ರ. ಸಂ. | ಅಭ್ಯರ್ಥಿಯ ಹೆಸರು | ರೋಲ್ ಸಂಖ್ಯೆ | ಜನ್ಮ ದಿನಾಂಕ | ಪ್ರವರ್ಗ ಹಂಚಿಕೆ | ಪಡೆದ ಅಂಕಗಳು |
|---|---|---|---|---|---|
| 1. | ಚಂದ್ರಶೇಖರ್ ಆರ್.ಜಿ. | ಎಕ್ಸ್‌ಡಿ431 | 24.10.1980 | ಸಾ.ಅ–ಇತರೆ/ಸಾ.ಅ.–ಕ.ಮಾ.ಅ. | 184 |
| 2. | ಈರಪ್ಪ ಶೇಖಪ್ಪ ಕೊಡ್ಲಿ | ಎನ್ಇ088 | 01.05.1977 | ಸಾ.ಅ.–ಗ್ರಾ.ಅ./3ಬಿ.–ಗ್ರಾ.ಅ.–ಕ.ಮಾ.ಅ. | 182 |
| 3. | ಮಾಬುಸಾಬ ನದಾಫ್ | ಎನ್‌ಡಿ447 | 15.08.1978 | ವರ್ಗ–1 ಗ್ರಾ.ಅ./ವರ್ಗ–1 ಗ್ರಾ.ಅ.–ಕ.ಮಾ.ಅ. | 179 |

| ಕ್ರ. ಸಂ. | ಅಭ್ಯರ್ಥಿಯ ಹೆಸರು | ರೋಲ್ ಸಂಖ್ಯೆ | ಜನ್ಮ ದಿನಾಂಕ | ಪ್ರವರ್ಗ ಹಂಚಿಕೆ | ಪಡೆದ ಅಂಕಗಳು |
|---|---|---|---|---|---|
| 4. | ಶ್ರೀಧರ ಎಲ್.ಸಿ. | ಸಿಸಿ389 | 07.04.1983 | ಪ.ಜಾ–ಕ.ಮಾ.ಅ./ಪ.ಜಾ–ಗ್ರಾ.ಅ.–ಕ.ಮಾ.ಅ. | 178 |
| 5. | ಸುನಿಲ್ ಟಿ.ಎಸ್. | ಎಕ್ಸ್‌ಎ267 | 13.08.1979 | ಪ.ಜಾ–ಮ.ಯೋ(ಪ.ಜಾ– ಇತರೆ ಪರಿವರ್ತಿಸಲಾಗಿದೆ) ಪ.ಜಾ. | 178 |
| 6. | ಮುಜಾಹಿದ್‌ಪಾಶಾ ಎಮ್.ಜಿ. | ಯುಎಫ್121 | 26.03.1984 | 2ಬಿ–ಗ್ರಾ.ಅ./2ಬಿ–ಗ್ರಾ.ಅ.ಕ.ಮಾ.ಅ. | 176 |
| 7. | ಮೊಹನಕುಮಾರಿ ಎ.ಬಿ. | ಸಿಎಲ್034 | 10.05.1982 | ಸಾ.ಅ.–ಮ.ಅ./3ಎ–ಮ.ಅ.–ಗ್ರಾ.ಅ.–ಕ.ಮಾ.ಅ. | 170 |
| 8. | ಬಸವರಾಜ ಹೂಗಾರ | ಎನ್‌ಸಿ493 | 01.06.1969 | ಸಾ.ಅ.–ಮಾ.ಯೋ/3ಬಿ–ಮಾ.ಯೋ–ಕ.ಮಾ.ಅ. | 143 |

ಆಯುಕ್ತರು,
ಪೌರಾಡಳಿತ ನಿರ್ದೇಶನಾಲಯ,
ನಗರಾಭಿವೃದ್ಧಿ ಇಲಾಖೆ
ಕರ್ನಾಟಕ ಸರ್ಕಾರ, ಬೆಂಗಳೂರು.

**DIRECTORATE OF MUNICIPAL ADMINISTRATION**

**9th floor, Visveswaraiah Towers, Dr. B.R. Ambedkar Veedhi, Bangalore-560001, Dated:25.03.2011**

In pursuance of this office notification No.DMA/ADM/EST/CR:37/08-09, Dated:24.09.2009, the Third provisional select list of candidates for 12 Posts of FDA for urban Local Bodies of Directorate of Municipal Administration, prepared on the basis of Karnataka Civil Services (Direct Recruitment by Competitive Examinations) (General) Rules, 2001 as amended from time to time, was published vide Notification of even number Dated:17.02.2011 inviting Objections, if any, from Candidates likely to be affected within 15 days of its publication. The Objections received have been considered and the Final Select List of 8 Candidates is prepared under Rule (6) of the said rules and is hereby published for the information of the candidates.

**Appointing Authority: COMMISSIONER**

**Name of the Department: Directorate of Municipal Administration**

| Sl. No. | Name of Candidate | Roll No. | Date of Birth | Category allocation | Marks |
|---|---|---|---|---|---|
| 1. | CHANDRASHEKHAR R.G. | XD431 | 24.10.1980 | GM-OTH/GM-KMC | 184 |
| 2. | IRAPPA SHEKHAPPA KODLI | NE088 | 01.05.1977 | GM-RC-/IIIB-RC-KMC | 182 |
| 3. | MABUSAB NADAF | ND447 | 15.08.1978 | CAT1-RC/CAT1-RC-KMC | 179 |
| 4. | SRIDHAR L.C. | CC389 | 07.04.1983 | SC-KMC/SC-RC-KMC | 178 |
| 5. | SUNIL T.S. | XA267 | 13.08.1979 | SC-EXM(CONVERTED TO SC-OTH)/SC | 178 |
| 6. | MUJAHID PASHA M.G. | UF121 | 26.03.1984 | IIB-RC/IIB-RC-KMC | 176 |
| 7. | MOHANAKUMARI A.B. | CL034 | 10.05.1982 | GM-WC/IIIA-WC-RC-KMC | 170 |
| 8. | BASAVARAJ HUGAR | NC493 | 01.06.1969 | GM-EXM/IIIB-EXM-KMC | 143 |

Commissioner
Directorate of Municipal Administration
Department of Urban Development Government
of Karnataka, Bangalore.

PR-181

**IN THE COURT OF THE IV ADDL. CITY CIVIL JUDGE, MAYOHALL, BANGALORE-CCH-21**

**P & S.C. NO.25013/2011, HG:27.05.2011**

**PETITIONER:**

Mrs. Lakshmamma @ Lakshmi 46 yrs W/o Late T.N. Shivalingaiah R/at No.567, 6th Cross, 'B' Block, B.D.A. Layout, Lingarajapuram Bangalore-84.

**V/s**

**RESPONDENT:** Nil

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate to the estate of the deceased Sri T.N. Shivalingaiah @ Shivalinge Gowda Who died on 07.10.2010 at Bangalore.

Be it known that No caveat has been entered and the said petition is posted for hearing on 27.05.2011 at 11 'O clock. Any person's claiming to have any interest may come and participate in the proceedings before grant of Succession Certificate.

**SCHEDULE**

Amount lying in the Canara Bank Frazer Town Branch, Bangalore.

Given under my hand and the seal of the Court, this the 19th day of April 2011

By Order of the Court,

PD-49

Asst. Registrar

City Civil Court Mayo Hall Unit, Bangalore.

**IN THE COURT OF THE IV ADDL. CITY CIVIL JUDGE, MAYOHALL, BANGALORE-CCH-21**

**P & S.C. NO.25014/2011, HG:27.05.2011**

**PETITIONER:**

Mr. George Mathew 52 yrs S/o Mr. P.V. George R/at No.12, Cannaught road Queens Road Cross, Bangalore-52.

**V/s**

**RESPONDENT:** NIL

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate in respect of amount of the deceased late Mr. Ajin Mathew Who died on 06.05.2010 at Bangalore.

Be it to known that No caveat has been entered and the said petition is posted for hearing on 27.05.2011 at 11 'O clock. Any person's claiming to have any interest may come and participate in the proceedings before grant of Succession Certificate to the petitioners.

**SCHEDULE**

Oriental Insurance Company Limited Rs.1,00,000/- Claim bearing No.421704/31/2011/000001.

Given under my hand and the seal of the Court, this the 19th day of April 2011

By Order of the Court,

PD-51

Asst. Registrar

City Civil Court Mayo Hall Unit, Bangalore.

**IN THE COURT OF THE IV ADDL. CITY CIVIL JUDGE, MAYOHALL, BANGALORE-CCH-21**

**P & S.C. NO.25045/2010, HG:18.06.2011**

**PETITIONER:**

Sri Achudan Chandrahasan S/o Sri Chandrahasan 72 yrs R/at No.15, (Old No.135, Vannarpet Main Road) Kashi Vishwanath Temple Road, Viveknagar Post, Bangalore-47.

**V/s**

**RESPONDENT:** NIL

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate to the estate of the deceased Smt. C. Saraswathi Who died on 30.08.2010 at Bangalore.

Be it known that No caveat has been entered and the said petition is posted for hearing on 18.06.2011 at 11 'O clock. Any person's claiming to have any interest may come and participate in the proceedings before grant of Succession Certificate.

**SCHEDULE**

Saving Bank Account bearing No.0970101000951 with M/s Canara Bank, having its branch office at Viveknagar, Bangalore-47 and presently having a sum of Rs.9,78,596.05/-

Given under my hand and the seal of the Court, this the day of April-19th. 2011

By Order of the Court,

PD-52

Asst. Registrar

City Civil Court Mayo Hall Unit, Bangalore.

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಆರ್(3)06/2011–12/ಪಿಎಸ್‌ಸಿ, ದಿನಾಂಕ:28–04–2011**

**1.** ಕರ್ನಾಟಕ ನಾಗರೀಕ ಸೇವೆಗಳು (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇಮಕಾತಿ) ನಿಯಮಾವಳಿಗಳು 1983 ಮತ್ತು ಅದಕ್ಕೆ ಕಾಲಕಾಲಕ್ಕೆ ಮಾಡಿರುವ ತಿದ್ದುಪಡಿಗಳನ್ವಯ ಈ ಕೆಳಕಂಡಂತೆ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿನ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳನ್ನು ಭರ್ತಿಮಾಡಲು **ON-LINE** ಮೂಲಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ.

| ಕ್ರಮ ಸಂಖ್ಯೆ | ಇಲಾಖೆಗಳ ಹೆಸರು | ಶೀಘ್ರಲಿಪಿಗಾರರ ಹುದ್ದೆಗಳ ಸಂಖ್ಯೆ | ಬೆರಳಚ್ಚುಗಾರರ ಹುದ್ದೆಗಳ ಸಂಖ್ಯೆ |
|---|---|---|---|
| 1. | ಕರ್ನಾಟಕ ಸರ್ಕಾರದ ಸಚಿವಾಲಯ | 50 | 150 |
| 2. | ಭಾಷಾಂತರ ನಿರ್ದೇಶನಾಲಯ | 02 | 04 |
| 3. | ಸಾರಿಗೆ ಇಲಾಖೆ | 08 | 30 |
| 4. | ಎನ್ ಸಿ ಸಿ | – | 01 |
| 5. | ರಾಜ್ಯ ಲೆಕ್ಕ ಪತ್ರ ಇಲಾಖೆ | – | 07 |
| 6. | ಆಯುಷ್ ಇಲಾಖೆ | 02 | – |
| 7. | ಕರ್ನಾಟಕ ಮೇಲ್ಮನವಿ ಪ್ರಾಧಿಕಾರ | 05 | 03 |
| 8. | ಪದವಿ ಪೂರ್ವ ಶಿಕ್ಷಣ ಇಲಾಖೆ | – | 02 |
| 9. | ಗೃಹರಕ್ಷಕ ದಳ ಮತ್ತು ಪೌರ ರಕ್ಷಣಾ ಇಲಾಖೆ | – | 12 |
| 10. | ಕರ್ನಾಟಕ ಗೃಹ ಮಂಡಳಿ | – | 06 |
| | **ಒಟ್ಟು** | **67** | **215** |

**ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದೇ ಅರ್ಜಿ ಸಲ್ಲಿಸತಕ್ಕದ್ದು, ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಮುನ್ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.**

ಅರ್ಜಿಗಳನ್ನು ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ, ಇಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಶುಲ್ಕ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **ರೂ. 300/–** |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **ರೂ. 25/–** |

1) ಅಭ್ಯರ್ಥಿಗಳು ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಅರ್ಜಿ ಭರ್ತಿ ಮಾಡಲು On-Line ನಲ್ಲಿ ನೀಡಿರುವ ಸೂಚನೆಗಳನ್ವಯ ಗಮನಿಸಿ ಭರ್ತಿ ಮಾಡತಕ್ಕದ್ದು.

2) ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮಕೈಗೊಳ್ಳುವುದು.

2.1 ಈ ಕೆಳಗೆ ನಿಗದಿಪಡಿಸಿದ ಯಾವುದಾದರು ಒಂದು ಮಾದರಿಯಲ್ಲಿ ಮಾತ್ರ ನಿಗದಿತ ಶುಲ್ಕವನ್ನು ಪಾವತಿಸತಕ್ಕದ್ದು. ಇವುಗಳನ್ನು ಹೊರತುಪಡಿಸಿ ಇತರೆ ಸಹಕಾರಿ ಬ್ಯಾಂಕ್/ಬ್ಯಾಂಕಿನ ಶಾಖೆಗಳಲ್ಲಿ ಶುಲ್ಕ ಸಂದಾಯ ಮಾಡಿದಲ್ಲಿ ಪರಿಗಣಿಸಲಾಗುವುದಿಲ್ಲ ಹಾಗೂ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(ಅ) ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಚಲನ್ ನೀಡಿ ಹಣ ಪಾವತಿಸಬಹುದು.

(ಆ) ಯಾವುದೇ ಎನ್.ಇ.ಎಫ್.ಟಿ (N.E.F.T) ಸೌಲಭ್ಯವುಳ್ಳ ಇತರೆ ಬ್ಯಾಂಕಿನ ಶಾಖೆಗಳಲ್ಲಿ (ಸಹಕಾರಿ ಬ್ಯಾಂಕ್‌ಗಳನ್ನು ಹೊರತುಪಡಿಸಿ) ಎನ್.ಇ.ಎಫ್.ಟಿ (N.E.F.T) ಚಲನ್ ನೀಡಿ ಹಣ ಪಾವತಿಸಬಹುದು.

* ಎನ್.ಇ.ಎಫ್.ಟಿ (N.E.F.T) ಅಂದರೆ ನ್ಯಾಷನಲ್ ಎಲೆಕ್ಟ್ರಾನಿಕ್ ಫಂಡ್ ಟ್ರಾನ್ಸಫರ್. ಈ ಸೌಲಭ್ಯವುಳ್ಳ ಯಾವುದೇ ಬ್ಯಾಂಕ್‌ನಿಂದ ಹಣವನ್ನು ಇತರೆ ಬ್ಯಾಂಕ್/ವ್ಯಕ್ತಿ/ಸಂಸ್ಥೆಗೆ ವರ್ಗಾಯಿಸಬಹುದು. ಆದ್ದರಿಂದ ಅಭ್ಯರ್ಥಿಗಳು ಅವರಿಗೆ ಅನುಕೂಲವಾಗುವಂತೆ ಯಾವುದೇ ಎನ್.ಇ.ಎಫ್.ಟಿ (N.E.F.T) ಸೌಲಭ್ಯವುಳ್ಳ ಬ್ಯಾಂಕ್‌ನಲ್ಲಿ (ಸಹಕಾರಿ ಬ್ಯಾಂಕ್‌ಗಳನ್ನು ಹೊರತುಪಡಿಸಿ) ಈ ಸಂಬಂಧ ಮುದ್ರಿತವಾಗುವ ಚಲನ್ ಅನ್ನು ಡೌನ್‌ಲೋಡ್ ಮಾಡಿಕೊಂಡು ಶುಲ್ಕವನ್ನು ಪಾವತಿಸಿ ಬ್ಯಾಂಕಿನವರು ನೀಡುವ ಚಲನ್ ಪ್ರತಿಯನ್ನು ಇಟ್ಟುಕೊಳ್ಳಬೇಕು. ಈ ಸೌಲಭ್ಯಕ್ಕಾಗಿ ಅಭ್ಯರ್ಥಿಯು ರೂ. 6/– ರ ಸೇವಾ ಶುಲ್ಕವನ್ನು ಪಾವತಿಸಬೇಕಾಗುತ್ತದೆ.

3. ಆನ್–ಲೈನ್ (On-line) ಮುಖಾಂತರ ಅರ್ಜಿ ಸಲ್ಲಿಸುವ ವಿಧಾನ: ಅಭ್ಯರ್ಥಿಗಳು ಆನ್ ಲೈನ್ ಮೂಲಕ ಅರ್ಜಿ ಸಲ್ಲಿಸುವ ಮುನ್ನ ಅವರ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಒಂದು ಬಿಳಿ ಹಾಳೆಯ ಮೇಲೆ ಅಂಟಿಸಿ ಅದರ ಕೆಳಗೆ ಅವರ ಸಹಿಯನ್ನು ಸ್ಕ್ಯಾನ್ ಮಾಡಿ UPLOAD ಮಾಡಲು ಸಿದ್ಧವಾಗಿಟ್ಟುಕೊಂಡಿರಬೇಕು.

ಅಭ್ಯರ್ಥಿಗಳು ಆಯೋಗದ ಅಧಿಕೃತ ವೆಬ್‌ಸೈಟ್ http://kpsc.kar.nic.in ನಲ್ಲಿ ಅರ್ಜಿ ಸಲ್ಲಿಸಲು ಬೇಕಾದ ಸೂಚನೆಗಳನ್ನು ವೀಕ್ಷಿಸಲು 'Instructions for ON LINE application for Stenographer/Typist ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು. ಅರ್ಜಿಯನ್ನು ಸಲ್ಲಿಸಲು 'Submit Fresh application' ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು. ಅರ್ಜಿಯಲ್ಲಿನ ವಿವರಗಳನ್ನು ಭರ್ತಿ ಮಾಡಿದ ನಂತರ 'Preview' ಬಟನ್ ಒತ್ತಿ ಅರ್ಜಿಯಲ್ಲಿ ನಮೂದಿಸಿರುವ ವಿವರಗಳನ್ನು ಮತ್ತೊಮ್ಮೆ ಕೂಲಂಕಷವಾಗಿ ನೋಡಿಕೊಳ್ಳಬೇಕು. ನಮೂದಿಸಿರುವ ವಿವರಗಳಲ್ಲಿ ಏನಾದರೂ ತಪ್ಪುಗಳಾಗಿದ್ದಲ್ಲಿ ಅದನ್ನು ಸರಿಪಡಿಸಲು edit ಮೇಲೆ ಕ್ಲಿಕ್ ಮಾಡಿ ನಂತರ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು. ಆನಂತರ ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಮನದಟ್ಟು ಮಾಡಿಕೊಂಡ ತರುವಾಯ, 'Submit' ಬಟನ್ ಅನ್ನು ಒತ್ತಬೇಕು. ಆ ನಂತರ ಪರದೆಯ ಮೇಲೆ ಮೂಡುವ Password ಮತ್ತು Application No. (ಅರ್ಜಿಯ ಸಂಖ್ಯೆ) ಅನ್ನು ಅಭ್ಯರ್ಥಿಯು ಗುರುತು ಹಾಕಿಕೊಳ್ಳತಕ್ಕದ್ದು. ಮುಂದೆ ಚಲನ್ ಮುದ್ರಿಸಲು ಮತ್ತು ಅರ್ಜಿಯ ಸ್ಥಿತಿಯನ್ನು ನೋಡಲು ಈ ಮಾಹಿತಿಗಳು ಅವಶ್ಯವಿರುತ್ತದೆ.

3.1 ಅರ್ಜಿಯ ಶುಲ್ಕವನ್ನು ಪಾವತಿಸಲು ಬೇಕಾದ ಬ್ಯಾಂಕ್ ಚಲನನ್ನು ಮುದ್ರಿಸಲು 'Generate Challan' ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು. ಶುಲ್ಕವನ್ನು 'Syndicate Bank' ಶಾಖೆಗಳಲ್ಲಿ ಪಾವತಿಸಲು 'Syndicate Bank Challan' ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು. ಇತರೆ ಯಾವುದೇ NEFT ವ್ಯವಸ್ಥೆ ಇರುವ (ಸಹಕಾರಿ ಬ್ಯಾಂಕುಗಳನ್ನು ಹೊರತುಪಡಿಸಿ) 'NEFT Challan' ಎನ್ನುವ ಲಿಂಕನ್ನು ಕ್ಲಿಕ್ ಮಾಡಿ ಚಲನ್‌ಗಳನ್ನು ಪಡೆದುಕೊಂಡು ಶುಲ್ಕವನ್ನು ನಿಗದಿಪಡಿಸಿದ ಕೊನೆಯ ದಿನಾಂಕದ ಒಳಗೆ ಸಂದಾಯಮಾಡಬೇಕು. ಶುಲ್ಕ ಸಂದಾಯ ಮಾಡದ ಅರ್ಜಿಗಳನ್ನು ತಿರಸ್ಕೃತಗೊಳಿಸಲಾಗುವುದು.

3.2 ಅರ್ಜಿಯ ಪ್ರತಿಯನ್ನು ಮುದ್ರಿಸಿಕೊಳ್ಳಲು ಅಭ್ಯರ್ಥಿಯು 'Print Application Form' ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು. ಅರ್ಜಿಯ ಪ್ರತಿಯನ್ನು ಮತ್ತು ಶುಲ್ಕ ಸಂದಾಯ ಮಾಡಿದ ಚಲನ್‌ಅನ್ನು ಕಡ್ಡಾಯವಾಗಿ ಅಭ್ಯರ್ಥಿಗಳು ತಮ್ಮೊಂದಿಗೆ ಇಟ್ಟುಕೊಳ್ಳತಕ್ಕದ್ದು. ಆಯೋಗವು ಅಪೇಕ್ಷಿಸಿದಾಗ ಈ ಚಲನ್ ಅನ್ನು ಹಾಜರುಪಡಿಸಬೇಕು.

3.3 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಅರ್ಜಿ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

**ವಿ.ಸೂ.:–** ಅಭ್ಯರ್ಥಿಯು ಶೀಘ್ರಲಿಪಿಗಾರರ ಹಾಗೂ ಬೆರಳಚ್ಚುಗಾರರ ಎರಡೂ ಹುದ್ದೆಗಳಿಗೂ ಅರ್ಜಿ ಸಲ್ಲಿಸ ಬಯಸಿದಲ್ಲಿ ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಿ ಶುಲ್ಕ ಪಾವತಿಸತಕ್ಕದ್ದು.

- ➡ ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 29– 04–2011.
- ➡ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 28 –05–2011 ಸಂಜೆ 5.30 ಗಂಟೆ ಅಗಿರುತ್ತದೆ.
- ➡ ಶುಲ್ಕ ಸಂದಾಯ ಮಾಡಲು ಕೊನೆಯ ದಿನಾಂಕ: 30–05–2011. ಬ್ಯಾಂಕಿನ ವೇಳೆಯೊಳಗೆ.

**ವಿಶೇಷ ಸೂಚನೆ:** On-line ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 30574913, 30574957, 30574910, 30574959, 30574951 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**4. ಅರ್ಹತಾ ಷರತ್ತುಗಳು:**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**5. ಶೈಕ್ಷಣಿಕ ವಿದ್ಯಾರ್ಹತೆ:–**

**ಅ. ಶೀಘ್ರಲಿಪಿಗಾರರ ಹುದ್ದೆಗಳಿಗೆ :**

1. ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಸೀನಿಯರ್ ಗ್ರೇಡ್ ಶೀಘ್ರಲಿಪಿ ಹಾಗೂ ಕನ್ನಡ ಸೀನಿಯರ್ ಗ್ರೇಡ್ ಬೆರಳಚ್ಚು ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

3. ಕನ್ನಡ ಶೀಘ್ರಲಿಪಿ ಪ್ರೊಫಿಷಿಯನ್ಸಿ ಗ್ರೇಡ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳಿಗೆ ಅರ್ಹ ಪರೀಕ್ಷೆಗಳಲ್ಲಿ ಪಡೆದ ಶೇಕಡ ಒಟ್ಟು ಅಂಕಗಳಿಗೆ 5% ರಷ್ಟು ಕೃಪಾಂಕ ಸೇರಿಸಲಾಗುವುದು.

**ಆ. ಬೆರಳಚ್ಚುಗಾರರ ಹುದ್ದೆಗಳಿಗೆ :**

1. ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಸೀನಿಯರ್ ಗ್ರೇಡ್ ಬೆರಳಚ್ಚು ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ಸೂಚನೆ:–1. (ಅ) ಮತ್ತು (ಆ) ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು / ಹಾಜರಾಗಿ ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ.**

ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಹುದ್ದೆಗಳ ಮುಂದೆ ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಬೇಕು ಹಾಗೂ ಸದರಿ ದಿನಾಂಕಕ್ಕೆ ವಿದ್ಯಾರ್ಹತೆಯ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರಬೇಕು.

**ಸೂಚನೆ:–2.** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ವಾಣಿಜ್ಯ ಪರೀಕ್ಷೆಗಳ ಕನ್ನಡ ಸೀನಿಯರ್ ಗ್ರೇಡ್ ಶೀಘ್ರಲಿಪಿ ಹಾಗೂ ಕನ್ನಡ ಸೀನಿಯರ್ ಗ್ರೇಡ್ ಬೆರಳಚ್ಚು ವಿದ್ಯಾರ್ಹತೆಯನ್ನೂ ಸಹ ಹೊಂದಿರುವ ಅಭ್ಯರ್ಥಿಗಳು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೋಮೊ ವಿದ್ಯಾರ್ಹತೆಯನ್ನೂ ಸಹ ಹೊಂದಿದ್ದಲ್ಲಿ ಅರ್ಜಿಯನ್ನು ಸಲ್ಲಿಸುವಾಗ ಎರಡೂ ವಿದ್ಯಾರ್ಹತೆಗಳ ಅಂಕಗಳನ್ನು ನಮೂದಿಸಲು ಅವಕಾಶವಿರುವುದಿಲ್ಲ ಹಾಗೂ ಯಾವುದೇ ಹುದ್ದೆಗೂ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸುವಂತಿಲ್ಲವಾದ್ದರಿಂದ ವಾಣಿಜ್ಯ ಪರೀಕ್ಷೆ ಹಾಗೂ ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೋಮೊ ವಿದ್ಯಾರ್ಹತೆಗಳ ಪೈಕಿ ಯಾವ ವಿದ್ಯಾರ್ಹತೆಯ ಅಂಕಗಳು ತಮಗೆ ಅನುಕೂಲಕರವೋ ಎಂಬುದನ್ನು ತಾವೇ ನಿರ್ಣಯಿಸಿಕೊಂಡು ಆ ವಿದ್ಯಾರ್ಹತೆಯ ಅಂಕಗಳನ್ನು ಸಂಬಂಧಿತ ಅಂಕಣಗಳಲ್ಲಿ ದಾಖಲಿಸಬೇಕು. ಒಮ್ಮೆ ಅಂಕಗಳನ್ನು ಅರ್ಜಿಯಲ್ಲಿ ನಮೂದಿಸಿದ ತರುವಾಯ ಆಯೋಗದಲ್ಲಿ ಅಂಕಗಳ ಬದಲಾವಣೆಗೆ ಅವಕಾಶವಿರುವುದಿಲ್ಲ.

**ಸೂಚನೆ:–3.** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಸೀನಿಯರ್ ಗ್ರೇಡ್ ಶೀಘ್ರಲಿಪಿ ಹಾಗೂ ಕನ್ನಡ ಸೀನಿಯರ್ ಗ್ರೇಡ್ ಬೆರಳಚ್ಚು ಪರೀಕ್ಷೆಗೆ ತತ್ಸಮಾನ ವಿದ್ಯಾರ್ಹತೆಗೆ ಸಂಬಂಧಿಸಿದ ವಿದ್ಯಾರ್ಹತೆಯ ವಿವರಗಳನ್ನು **ಅನುಬಂಧ–1ರಲ್ಲಿ** ತೋರಿಸಿದೆ. ಈ ಡಿಪ್ಲೋಮೊ ಪರೀಕ್ಷೆಯ ಸಂಬಂಧಿತ ಸೆಮಿಸ್ಟರ್/ವಾರ್ಷಿಕ ಪರೀಕ್ಷೆಗಳಲ್ಲಿ ಬೆರಳಚ್ಚು/ಶೀಘ್ರಲಿಪಿ ವಿಷಯಗಳಲ್ಲಿ ಪಡೆದ ಅಂಕಗಳನ್ನು ಮಾತ್ರ ನಮೂದಿಸಬೇಕೆ ಹೊರತಾಗಿ ಡಿಪ್ಲೋಮೊ ವಿದ್ಯಾರ್ಹತೆಯ ಇನ್ನಿತರ ವಿಷಯಗಳ ಅಂಕಗಳನ್ನು ನಮೂದಿಸುವಂತಿಲ್ಲ. ಅಂಕಗಳನ್ನು ನಮೂದಿಸುವಾಗ ಅಭ್ಯರ್ಥಿಗಳಿಂದ ಯಾವುದೇ ತಪ್ಪಾದಲ್ಲಿ ಅಭ್ಯರ್ಥಿಗಳೇ ಹೊಣೆಗಾರರಾಗಿರುತ್ತಾರೆ.

**6. ಹುದ್ದೆಗಳ ವರ್ಗೀಕರಣ:–**

(ಅ) ಶೀಘ್ರಲಿಪಿಗಾರರ ಹುದ್ದೆಗಳಿಗೆ:

ಈ ಹುದ್ದೆಗಳ ವರ್ಗೀಕರಣದ ವಿವರವನ್ನು **ಅನುಬಂಧ–2ರಲ್ಲಿ** ತೋರಿಸಿದೆ.

**(ಆ) ಬೆರಳಚ್ಚುಗಾರರ ಹುದ್ದೆಗಳಿಗೆ:**

ಈ ಹುದ್ದೆಗಳ ವರ್ಗೀಕರಣದ ವಿವರವನ್ನು **ಅನುಬಂಧ–3ರಲ್ಲಿ** ತೋರಿಸಿದೆ.

ಅನುಬಂಧದಲ್ಲಿ ತೋರಿಸಿರುವ ವಿವಿಧ ನೇಮಕಾತಿ ಪ್ರಾಧಿಕಾರಿಗಳಲ್ಲಿ ಖಾಲಿಯಿರುವ ಶೀಘ್ರಲಿಪಿಗಾರರ ಹಾಗೂ ಬೆರಳಚ್ಚುಗಾರರ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ, ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣದಲ್ಲಿ ಬದಲಾವಣೆಯಾದಲ್ಲಿ ಅಂದರೆ ಕಡಿಮೆಯಾದಲ್ಲಿ ತಿದ್ದುಪಡಿ ಮತ್ತು ಹೆಚ್ಚಾದಲ್ಲಿ ಸೇರ್ಪಡೆ ಅಧಿಸೂಚನೆಯ ಮೂಲಕ ಪ್ರಕಟಿಸಲಾಗುವುದು. ಅಂತಿಮವಾಗಿ ಆಯ್ಕೆ ಹಂತಕ್ಕೆ ಬರುವ ಅಭ್ಯರ್ಥಿಗಳಿಗೆ, ಅವರುಗಳು ಇಲಾಖಾ ಆದ್ಯತೆಯನ್ನು ನೀಡುವ ಸಲುವಾಗಿ ಅಂತಹ ಅಭ್ಯರ್ಥಿಗಳಿಗೆ ಮಾತ್ರ ಹುದ್ದೆಗಳ ವರ್ಗೀಕರಣವನ್ನು ಒದಗಿಸಲಾಗುವುದು.

**7. ವೇತನ ಶ್ರೇಣಿ :–**

**ಅ) ಶೀಘ್ರಲಿಪಿಗಾರರ ಹುದ್ದೆಗಳಿಗೆ:**

ರೂ. 8000–200–8600–225–9500–250–10500–300–12300–350–14400–400– 14800 (ಸಚಿವಾಲಯದಲ್ಲಿ ಮಾತ್ರ)

ರೂ. 7275–175–7800–200–8600–225–9500–250–10500–300–12300–350–13350

**ಆ) ಬೆರಳಚ್ಚುಗಾರರ ಹುದ್ದೆಗಳಿಗೆ:**

ರೂ. 5800–100–6000–125–6500–150–7100–175–7800–200–8600–225–9500–250–10500

**ಪಿಂಚಣಿ ಸೌಲಭ್ಯ:** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006ರಂತೆ.

**8. ವಯೋಮಿತಿ:–** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು

ಆ) ಗರಿಷ್ಠ ವಯೋಮಿತಿ :

| | |
|---|---|
| **ಸಾಮಾನ್ಯ ವರ್ಗ** | **35 ವರ್ಷ** |
| **2ಎ,2ಬಿ,3ಎ,3ಬಿ** | **38 ವರ್ಷ** |
| **ಪ.ಜಾ/ಪ.ಪಂ/ಪ್ರ–1** | **40 ವರ್ಷ** |

**ಅಭ್ಯರ್ಥಿಗಳ ಜನ್ಮ ದಿನಾಂಕವನ್ನು ಅವರ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ) / ಕುಮ್ಯುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಪರಿಗಣಿಸಲಾಗುವುದು. ಇವುಗಳನ್ನು ಹೊರತುಪಡಿಸಿ ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.**

**ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.**

- ➢ ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
- ➢ ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ ಐದು ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
- ➢ ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:** (ಎ) ಮಾಜಿ ಸೈನಿಕ ಎಂದರೆ ಸಶಸ್ತ್ರದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯುರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು (ಬಿ) ಕೇಂದ್ರ ಸಶಸ್ತ್ರದಳಗಳಲ್ಲಿ ಸೇವೆ ಸಲ್ಲಿಸುವಾಗ ಮಡಿದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಅ) ಮೇಲ್ಕಂಡ ದಳದ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇನೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

**(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.**

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

ಈ ಮೇಲ್ಕಂಡ ವರ್ಗದ ಅಭ್ಯರ್ಥಿಗಳು ಮಾಜಿ ಸೈನಿಕ ಮೀಸಲಾತಿಗೆ ಅರ್ಹರಿರುತ್ತಾರೆ.

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವ ವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

➢ ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕೋರ್‌ನಲ್ಲಿ ಪೂರ್ಣ ಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

➢ ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸಮಾಡುತ್ತಿದ್ದರೆ, ಅಥವಾ ಹಿಂದೆಯಿದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು

➢ ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು

➢ ಅಭ್ಯರ್ಥಿಯು ಜೀತಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು

ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

➢ ಅಂಗವಿಕಲ ಅಭ್ಯರ್ಥಿಗಳಿಗೆ 10 ವರ್ಷಗಳು.

**9. ನೇಮಕಾತಿ ವಿಧಾನ:**

(ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇಮಕಾತಿ) ನಿಯಮಾವಳಿಗಳು 1983 ಮತ್ತು ಅದಕ್ಕೆ ಕಾಲಕಾಲಕ್ಕೆ ಮಾಡಿರುವ ತಿದ್ದುಪಡಿಗಳನ್ವಯ

**ಶೀಘ್ರಲಿಪಿಗಾರರ ಹುದ್ದೆಗಳಿಗೆ:**

ಅಭ್ಯರ್ಥಿಯು ಎಸ್.ಎಸ್.ಎಲ್.ಸಿ / ತತ್ಸಮಾನ ಪರೀಕ್ಷೆಯ ಶೇಕಡವಾರು ಅಂಕಗಳು ಹಾಗೂ ಕನ್ನಡ ಶೀಘ್ರಲಿಪಿ (ಸೀನಿಯರ್ ಗ್ರೇಡ್)ಪ್ರೌಢ ದರ್ಜೆಯ ಶೇಕಡವಾರು ಅಂಕಗಳು ಹಾಗೂ ಕನ್ನಡ ಬೆರಳಚ್ಚು ಪ್ರೌಢ ದರ್ಜೆಯ (ಸೀನಿಯರ್) ಶೇಕಡವಾರು ಅಂಕಗಳು ಒಟ್ಟುಗೂಡಿಸಿ ಈ ಅಂಕಗಳ ಜೇಷ್ಠತೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡುವುದು.

**ಸೂಚನೆ:** ಕನ್ನಡ ಶೀಘ್ರಲಿಪಿ ಪ್ರೊಫಿಷಿಯನ್ಸಿ ಗ್ರೇಡ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳಿಗೆ ಅರ್ಹ ಪರೀಕ್ಷೆಗಳಲ್ಲಿ ಪಡೆದ ಶೇಕಡ ಒಟ್ಟು ಅಂಕಗಳಿಗೆ ಶೇಕಡಾ 5 ರಷ್ಟು ಕೃಪಾಂಕ ಸೇರಿಸಲಾಗುವುದು.

**ಬೆರಳಚ್ಚುಗಾರರ ಹುದ್ದೆಗಳಿಗೆ:**

ಅಭ್ಯರ್ಥಿಯು ಎಸ್.ಎಸ್.ಎಲ್.ಸಿ./ ತತ್ಸಮಾನ ಪರೀಕ್ಷೆಯ ಶೇಕಡವಾರು ಅಂಕಗಳು ಹಾಗೂ ಕನ್ನಡ ಬೆರಳಚ್ಚು ಪ್ರೌಢ ದರ್ಜೆಯ (ಸೀನಿಯರ್ ಗ್ರೇಡ್)ಶೇಕಡವಾರು ಅಂಕಗಳು ಒಟ್ಟುಗೂಡಿಸಿ ಈ ಅಂಕಗಳ ಜೇಷ್ಠತೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ಅನುಸಾರ ಆಯ್ಕೆಮಾಡುವುದು.

**10. ಪ್ರಮುಖ ಸೂಚನೆಗಳು:**

**10.1. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:**

ಜಾತಿ ಮೀಸಲಾತಿ ಕೋರಬಯಸುವ

➡ ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ

➡ ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ

➡ 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಶೀಲ್ದಾರರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು, ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಅಂದರೆ, ಹಿಂದುಳಿದ ವರ್ಗಗಳ ಪ್ರ–2ಎ, ಪ್ರ–2ಬಿ, ಪ್ರ–3ಎ ಮತ್ತು ಪ್ರ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದ ದಿನಾಂಕದಿಂದ ಅರ್ಜಿಗಳನ್ನು ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದವರೆಗೆ 05 ವರ್ಷಗಳ ಅವಧಿಯಲ್ಲಿರಬೇಕು. ನಿಗದಿ ಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.

**10.2. ಗ್ರಾಮೀಣ ಅಭ್ಯರ್ಥಿ:**

➡ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ಸತತವಾಗಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಮೂಲ ದಾಖಲೆಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

➡ ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟು ಕೊಂಡಿರತಕ್ಕದ್ದು.

